ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 347

ಉತ್ತರಿಸಬೇಕಾದ ದಿನಾಂಕ : 06.03.2020

ಸದಸ್ಯರ ಹೆಸರು : ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯ ನಗರ ಪ್ರದೇಶದಲ್ಲಿ ಮತ್ತು ಗ್ರಾಮೀಣ ಪ್ರದೇಶದಲ್ಲಿ ಯುವ ಮತ್ತು ಪ್ರತಿಭಾವಂತ ಕ್ರೀಡಾಪಟುಗಳನ್ನು ಗುರುತಿಸಲು ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು | ರಾಜ್ಯ ಸರ್ಕಾರವು ನಗರ ಪ್ರದೇಶದಲ್ಲಿ ಮತ್ತು ಗ್ರಾಮೀಣ ಪ್ರದೇಶದಲ್ಲಿ ಯುವ ಮತ್ತು ಪ್ರತಿಭಾವಂತ ಕ್ರೀಡಾಪಟುಗಳನ್ನು ಗುರುತಿಸಲು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br>1) **ಕ್ರೀಡಾಶಾಲೆ/ನಿಲಯ**: ರಾಜ್ಯದಲ್ಲಿ ಒಟ್ಟು 34 ಕ್ರೀಡಾಶಾಲೆ/ನಿಲಯಗಳಿದ್ದು, ಇವುಗಳಿಗೆ ಪ್ರವೇಶ ನೀಡುವ ಸಂಬಂಧ ತಾಲ್ಲೂಕು, ಜಿಲ್ಲಾ, ವಿಭಾಗ ಮತ್ತು ರಾಜ್ಯಮಟ್ಟದಲ್ಲಿ ಆಯ್ಕೆ ಶಿಬಿರಗಳನ್ನು ನಡೆಸಿ ಕ್ರೀಡಾಪಟುಗಳ ದೈಹಿಕ ಕ್ಷಮತೆಯನ್ನು ಪರೀಕ್ಷಿಸಿ ಅರ್ಹ ಕ್ರೀಡಾಪಟುಗಳಿಗೆ ಕ್ರೀಡಾಶಾಲೆ/ನಿಲಯಗಳಿಗೆ ಪ್ರವೇ ಶ ನೀಡಲಾಗುತ್ತಿದೆ.<br>**2)ಶೈಕ್ಷಣಿಕ ಶುಲ್ಕ ಮರುಪಾವತಿ:** ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಸಾಧನೆ ಮಾಡಲಾದ ಕ್ರೀಡಾಪಟುಗಳಿಗೆ ಶೈಕ್ಷಣಿಕ ಶುಲ್ಕ ಮರುಪಾವತಿ ಮಾಡಲಾಗುತ್ತಿದೆ.<br>**3)ವಿದ್ಯಾರ್ಥಿ ವೇತನ:** ರಾಜ್ಯ ಮಟ್ಟದಲ್ಲಿ ಪದಕ ವಿಜೇತರಾಗಿ ರಾಷ್ಟ್ರೀಯ ಮಟ್ಟದಲ್ಲಿ ಸಾಧನೆ ಮಾಡಿದ ಪ್ರಾಥಮಿಕ ಮತ್ತು ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ರೂ.10,000/- ವಿದ್ಯಾರ್ಥಿ ವೇತನ ನೀಡಿ ಪ್ರೋತ್ಸಾಹಿಸಲಾಗುತ್ತಿದೆ.<br>**4)ಕರ್ನಾಟಕ ಸ್ಪೋರ್ಟ್ಸ್ ಆಕಾಡೆಮಿ ಫಾರ್ ಎಕ್ಸಲೆನ್ಸ್:** ಮುಂಬರುವ ವರ್ಷಗಳಲ್ಲಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಗಣನೀಯ ಸಾಧನೆ ದಾಖಲಿಸುವ ಸಾಧ್ಯತೆ ಇರುವ ಪ್ರತಿಭಾನ್ವಿತ ಕ್ರೀಡಾಪಟುಗಳಿಗೆ ಉನ್ನತ ಕ್ರೀಡಾ ತರಬೇತಿಗಾಗಿ ಸಹಾಯಧನ ನೀಡಲಾಗುತ್ತಿದೆ.<br>**5)ಕರ್ನಾಟಕ ಸಹಸ್ರ ಕ್ರೀಡಾ ಪ್ರತಿಭಾ ಯೋಜನೆ:** 1000 ಯುವ ಕ್ರೀಡಾ ಪ್ರತಿಭೆಗಳನ್ನು ಗುರುತಿಸಿ, ಅವರಿಗೆ ಅಗತ್ಯವಾದ ಕ್ರೀಡಾ ವಿಜ್ಞಾನ ಮತ್ತು ತಂತ್ರಜ್ಞಾನ ಸೇವೆಗಳು, ವೈಜ್ಞಾನಿಕ ತರಬೇತಿ ಒದಗಿಸುವ ಮೂಲಕ ಅಂತಾರಾಷ್ಟ್ರೀಯ ಕ್ರೀಡಾಕೂಟಗಳಲ್ಲಿ ಅದರಲ್ಲೂ ಮುಖ್ಯವಾಗಿ ಒಲಂಪಿಕ್ ಕ್ರೀಡಾಕೂಟದಲ್ಲಿ ಪದಕ ಗೆಲ್ಲುವ ಕ್ರೀಡಾಪಟುಗಳನ್ನು ರೂಪಿಸಲು ಕ್ರಮಕೈಗೊಳ್ಳಲಾಗುತ್ತಿದೆ. |

<table>
<tr>
<td>ಆ</td>
<td>ಇದಕ್ಕಾಗಿ ಕಳೆದ 3 ವರ್ಷಗಳಲ್ಲಿ ಖರ್ಚಾಗಿರುವ ವೆಚ್ಚವೆಷ್ಟು; (ತಾಲ್ಲೂಕುವಾರು ವಿವರಗಳನ್ನು ನೀಡುವುದು)</td>
<td>ಕರ್ನಾಟಕ ರಾಜ್ಯದ ಕ್ರೀಡಾಪಟುಗಳಿಗೆ ಜಿಲ್ಲಾವಾರು ವೆಚ್ಚ ಮಾಡಲಾದ ವಿವರ ಕೆಳಕಂಡತಿದೆ.<br>ರೂ. ಲಕ್ಷಗಳಲ್ಲಿ
<table>
<tr><th>ಕ್ರ ಸಂ</th><th>ಯೋಜನೆಯ ಹೆಸರು</th><th>2016–17</th><th>2017–18</th><th>2018–19</th></tr>
<tr><td>1</td><td>ವಿದ್ಯಾರ್ಥಿ ವೇತನ ಮತ್ತು ಶೈಕ್ಷಣಿಕ ಶುಲ್ಕ</td><td>185.05</td><td>146.67</td><td>200.00</td></tr>
<tr><td>2</td><td>ನಗದು ಪುರಸ್ಕಾರ</td><td>137.00</td><td>929.19</td><td>400.00</td></tr>
<tr><td>3</td><td>ಸ್ಪೋರ್ಟ್ಸ್ ಅಕಾಡೆಮಿ ಫಾರ್ ಎಕ್ಸಲೆನ್ಸಿ</td><td>147.50</td><td>200.00</td><td>–</td></tr>
</table>
ಅನುದಾನವನ್ನು ತಾಲ್ಲೂಕುವಾರು ಹಂಚಿಕೆ ಮಾಡಿರುವುದಿಲ್ಲ.</td>
</tr>
<tr>
<td>ಇ</td>
<td>ಯುವ ಕ್ರೀಡಾಪಟುಗಳನ್ನು ಗುರುತಿಸಲು ಅನುಸರಿಸುವ ಮಾನದಂಡಗಳೇನು; ಇದು ಯಾವ ಕ್ರೀಡೆಗಳಿಗೆ ಅನ್ವಯಿಸುತ್ತದೆ;</td>
<td>ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಿಂದ ಯುವ ಕ್ರೀಡಾಪಟುಗಳನ್ನು ಗುರುತಿಸಲು ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುತ್ತಿದೆ.<br>ಕ್ರೀಡಾಶಾಲೆ/ನಿಲಯಗಳಿಗೆ ಕ್ರೀಡಾಪಟುಗಳನ್ನು ಆಯ್ಕೆ ಮಾಡುವ ಸಂಬಂಧ ಮಾನದಂಡಗಳನ್ನು ರೂಪಿಸಿದ್ದು ಅದರಂತೆ ಕಿರಿಯ ಮತ್ತು ಹಿರಿಯ ವಿಭಾಗದಲ್ಲಿ ಆಯಾ ಕ್ರೀಡೆಗಳಿಗೆ ಸಂಬಂಧಿಸಿದಂತೆ ಕ್ರೀಡಾಪಟುಗಳಿಗೆ ದೈಹಿಕ ಕ್ಷಮತೆ ಪರೀಕ್ಷೆಗಳನ್ನು ನಡೆಸಿ ಆಯ್ಕೆಯಾದ ಕ್ರೀಡಾಪಟುಗಳನ್ನು ಕ್ರೀಡಾಶಾಲೆ/ನಿಲಯಗಳಿಗೆ ಪ್ರವೇಶ ನೀಡಲಾಗುತ್ತಿದೆ. ಇದು ಅಥ್ಲೆಟಿಕ್ಸ್, ವಾಲಿಬಾಲ್, ಬ್ಯಾಸ್ಕೆಟ್ ಬಾಲ್, ಜಿಮ್ನಾಸ್ಟಿಕ್ಸ್, ಹಾಕಿ, ಜುಡೋ, ಕುಸ್ತಿ, ಸೈಕ್ಲಿಂಗ್, ಫುಟ್ಬಾಲ್, ಆರ್ಚರಿ, ಫೆನ್ಸಿಂಗ್, ಖೋ-ಖೋ, ಈಜು, ಕಬಡ್ಡಿ ಕ್ರೀಡೆಗಳಿಗೆ ಅನ್ವಯಿಸುತ್ತದೆ.</td>
</tr>
<tr>
<td>ಈ</td>
<td>ಯುವ ಕ್ರೀಡಾಪಟುಗಳಿಗೆ ಉತ್ತೇಜನ ನೀಡಲು ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ; ಇದಕ್ಕಾಗಿ ಯಾವ ಸೌಲಭ್ಯಗಳನ್ನು ನೀಡಲಾಗುತ್ತಿದೆ?</td>
<td>ಯುವ ಕ್ರೀಡಾಪಟುಗಳಿಗೆ ಉತ್ತೇಜನ ನೀಡಲು ಇಲಾಖೆಯಿಂದ ಕೆಳಕಂಡ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ:<br><u>1)ನಗದು ಪುರಸ್ಕಾರ:</u> ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದ ಕ್ರೀಡಾಕೂಟಗಳಲ್ಲಿ ವಿಜೇತರಾದ ಕ್ರೀಡಾಪಟುಗಳಿಗೆ ನಗದು ಪುರಸ್ಕಾರ ಯೋಜನೆಯನ್ನು ಇಲಾಖೆಯು ಅನುಷ್ಠಾನಗೊಳಿಸುತ್ತಿದೆ.<br><u>2)ಏಕಲವ್ಯ ಪ್ರಶಸ್ತಿ:</u> ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಸಾಧನೆ ಮಾಡಲಾದ ಕ್ರೀಡಾಪಟುಗಳಿಗೆ ಏಕಲವ್ಯ ಪ್ರಶಸ್ತಿ ನೀಡಲಾಗುವುದು.<br><u>3)ಜೀವಮಾನ ಸಾಧನೆ ಪ್ರಶಸ್ತಿ:</u> ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದ ಕ್ರೀಡಾಪಟುಗಳಿಗೆ ತರಬೇತಿ ನೀಡಿದ ರಾಜ್ಯದ ತರಬೇತುದಾರರಿಗೆ ಜೀವಮಾನ ಸಾಧನೆ ಪ್ರಶಸ್ತಿ ನೀಡಲಾಗುವುದು.<br><u>4)ಕರ್ನಾಟಕ ಕ್ರೀಡಾ ರತ್ನ ಪ್ರಶಸ್ತಿ:</u> ದೇಸೀ ಗ್ರಾಮೀಣ ಕ್ರೀಡೆಗಳಲ್ಲಿ ವಿಶೇಷ ಸಾಧನೆ ಮಾಡಿದ ರಾಜ್ಯದ ಗ್ರಾಮೀಣ ಕ್ರೀಡಾ ಪ್ರತಿಭೆಗಳಿಗೆ ಕರ್ನಾಟಕ ಕ್ರೀಡಾ ರತ್ನ ಪ್ರಶಸ್ತಿ ಹಾಗೂ ನಗದನ್ನು ನೀಡಿ ಗೌರವಿಸಲಾಗುವುದು.<br><u>5)ಶೈಕ್ಷಣಿಕ ಶುಲ್ಕ ಮರುಪಾವತಿ:</u> ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ರಾಜ್ಯದಿಂದ ಪ್ರತಿನಿಧಿಸಿ</td>
</tr>
</table>

| | | |
|---|---|---|
| | | ಸಾಧನೆ ಮಾಡಲಾದ ಕ್ರೀಡಾಪಟುಗಳಿಗೆ ಶೈಕ್ಷಣಿಕ ಶುಲ್ಕ ಮರುಪಾವತಿ ಮಾಡಲಾಗುತ್ತಿದೆ.<br>**6)ವಿದ್ಯಾರ್ಥಿ ವೇತನ:** ರಾಜ್ಯ ಮಟ್ಟದ ಪದಕ ವಿಜೇತರಾಗಿ ಅಂತರಾಷ್ಟ್ರೀಯ ಮಟ್ಟದಲ್ಲಿ ಸಾಧನೆ ಮಾಡಿದ ಪ್ರಾಥಮಿಕ ಮತ್ತು ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ರೂ.10,000/- ವಿದ್ಯಾರ್ಥಿ ವೇತನ ನೀಡಿ ಪ್ರೋತ್ಸಾಹಿಸಲಾಗುತ್ತಿದೆ.<br>**7)ಕರ್ನಾಟಕ ಸ್ಪೋರ್ಟ್ಸ್ ಆಕಾಡೆಮಿ ಫಾರ್ ಎಕ್ಸಲೆನ್ಸ್:** ಮುಂಬರುವ ವರ್ಷಗಳಲ್ಲಿ ಅಂತರ್ರಾಷ್ಟ್ರೀಯ ಮಟ್ಟದಲ್ಲಿ ಗಣನೀಯ ಸಾಧನೆ ದಾಖಲಿಸುವ ಸಾಧ್ಯತೆ ಇರುವ ಪ್ರತಿಭಾನ್ವಿತ ಕ್ರೀಡಾಪಟುಗಳಿಗೆ ಉನ್ನತ ಕ್ರೀಡಾ ತರಬೇತಿಗಾಗಿ ಸಹಾಯಧನ ನೀಡಲಾಗುತ್ತಿದೆ.<br>**8) ಸಾಮಾನ್ಯ ಪ್ರವೇಶ ಪರೀಕ್ಷೆ:** ಭಾರತ ಸರ್ಕಾರದಿಂದ ಮಾನ್ಯತೆ ಪಡೆದ ರಾಷ್ಟ್ರೀಯ ಕ್ರೀಡಾ ಸಂಸ್ಥೆಗಳು ಆಯೋಜಿಸುವ ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಮಟ್ಟದ ಕ್ರೀಡಾ ಸ್ಪರ್ಧೆಗಳಲ್ಲಿ ಪದಕಗಳಿಸಿದ ಕ್ರೀಡಾಪಟುಗಳಿಗೆ ವೃತ್ತಿಪರ ಕೋರ್ಸುಗಳಿಗೆ ಪ್ರವೇಶ ಬಯಸಿ ಸಲ್ಲಿಸಿದ ಅರ್ಜಿ ಪ್ರಸ್ತಾವನೆಗಳನ್ನು ಮೌಲ್ಯಮಾಪನ ಮಾಡಿ ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕದ ವಿಶೇಷಾಧಿಕಾರಿಗೆ ಕಳುಹಿಸಿಕೊಡಲಾಗುವುದು.<br>**9) ಅರ್ಜುನ ಪ್ರಶಸ್ತಿ:** ಕ್ರೀಡಾ ಕ್ಷೇತ್ರಕ್ಕೆ ಭಾರತ ಸರ್ಕಾರವು ಪ್ರಧಾನ ಮಾಡುತ್ತಿರುವ ವಿಶಿಷ್ಟ ಪ್ರಶಸ್ತಿ ಅರ್ಜುನ ಪ್ರಶಸ್ತಿಗೆ ಅತ್ಯುನ್ನತ ಸಾಧನೆ ಮಾಡಿದ ಕ್ರೀಡಾಪಟುಗಳನ್ನು ಗುರುತಿಸಿ ಸದರಿ ಪ್ರಶಸ್ತಿಗೆ ಅರ್ಹರಾದವರನ್ನು ಇಲಾಖೆಯ ವತಿಯಿಂದ ಶಿಫಾರಸ್ಸು ಮಾಡಲಾಗುವುದು.<br>**10) ರಾಜೀವ್ ಗಾಂಧಿ ಖೇಲ್ ರತ್ನ ಪ್ರಶಸ್ತಿ:** ಒಂದು ವರ್ಷದ ಅವಧಿಯಲ್ಲಿ ಕ್ರೀಡಾಪಟು ಅಥವಾ ಕ್ರೀಡಾ ತಂಡ ತೋರಿದ ಅತಿ ವಿಶಿಷ್ಟ ಹಾಗೂ ಗಮನಾರ್ಹ ಸಾಧನೆಯನ್ನು ಪರಿಗಣಿಸಿ ಅರ್ಹ ಕ್ರೀಡಾಪಟುಗಳನ್ನು ಗುರುತಿಸಿ ಪ್ರಶಸ್ತಿ ಶಿಫಾರಸ್ಸು ಮಾಡಲಾಗುವುದು.<br>**11) ಖೇಲೋ ಇಂಡಿಯಾ ಯೋಜನೆ:** ಕೇಂದ್ರ ಸರ್ಕಾರವು ಹೊರತಂದಿರುವ ಖೇಲೋ ಇಂಡಿಯಾ ಯೋಜನೆಯಡಿಯಲ್ಲಿ ಕ್ರೀಡಾಕೂಟಗಳ ಸಂಘಟನೆ, ನಗರ ಪ್ರದೇಶಗಳಲ್ಲಿ ಕ್ರೀಡಾ ಮೂಲಭೂತ ಸೌಕರ್ಯಗಳ ನಿರ್ಮಾಣ ಹಾಗೂ ಕ್ರೀಡಾ ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹ ನೀಡಲಾಗುತ್ತಿದೆ. "ಖೇಲೋ ಇಂಡಿಯಾ" ಯೋಜನೆಯನ್ನು ಅನುಷ್ಠಾನಗೊಳಿಸಲು ಕೇಂದ್ರ ಸರ್ಕಾರವು ಶೇ.100ರಷ್ಟು ಅನುದಾನವನ್ನು ನೀಡಿದೆ. |

**ವೈಎಸ್ ಡಿ-/ಇಬಿಬಿ/13/2020**

**(ಸಿ. ಟಿ. ರವಿ)**

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.